ಸೂ. 8 **102. ಅತ್ತಕಾಸುರ್** ರು. 1

سُوْرَةُ التَّكَاثُرِ مَكِّيَّةٌ — اٰيَاتُهَا ٨ — رُكُوْعُهَا ١

**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ — بِسْمِ اللّٰهِ الرَّحْمٰنِ الرَّحِيْمِ ○

1. ಹೆಚ್ಚು ಹೆಚ್ಚಾಗಿ ಮತ್ತು ಇತರರಿಗಿಂತ ಅಧಿಕವಾಗಿ ಸಂಪಾದಿಸುವ ಚಿಂತೆಯು ನಿಮ್ಮನ್ನು ಅನಾಸ್ಥೆಗೆ ಒಳಪಡಿಸಿ ಬಿಟ್ಟಿದೆ- — اَلْهٰكُمُ التَّكَاثُرُ ①

2. ಕೊನೆಗೆ (ಇದೇ ಚಿಂತೆಯಲ್ಲಿ) ನೀವು ಗೋರಿಯ ಅಂಚನ್ನು ತಲುಪುತ್ತೀರಿ. — حَتّٰى زُرْتُمُ الْمَقَابِرَ ②

3. ಖಂಡಿತ ಅಲ್ಲ, ಸದ್ಯವೇ ನಿಮಗೆ ತಿಳಿಯಲಿದೆ.-[1] — كَلَّا سَوْفَ تَعْلَمُوْنَ ③

4. ಇನ್ನೂ (ಕೇಳಿರಿ) ಖಂಡಿತ ಅಲ್ಲ, ಸದ್ಯವೇ ನಿಮಗೆ ತಿಳಿಯಲಿದೆ. — ثُمَّ كَلَّا سَوْفَ تَعْلَمُوْنَ ④

5. ಖಂಡಿತ ಅಲ್ಲ, ನೀವು ಖಚಿತ ಜ್ಞಾನದ ಆಧಾರದಲ್ಲಿ (ಈ ಪ್ರವೃತ್ತಿಯ ಪರಿಣಾಮವನ್ನು) ತಿಳಿದಿರುತ್ತಿದ್ದರೆ! (ನಿಮ್ಮ ವರ್ತನೆ ಹೀಗಿರುತ್ತಿರಲಿಲ್ಲ.) — كَلَّا لَوْ تَعْلَمُوْنَ عِلْمَ الْيَقِيْنِ ⑤

6. ನೀವು ನರಕವನ್ನು ಕಂಡೇ ತೀರುವಿರಿ- — لَتَرَوُنَّ الْجَحِيْمَ ⑥

7. ಇನ್ನೂ (ಕೇಳಿರಿ) ನೀವು ಸಂಪೂರ್ಣ ಅರಿವಿನೊಂದಿಗೆ ಅದನ್ನು ನೋಡುವಿರಿ- — ثُمَّ لَتَرَوُنَّهَا عَيْنَ الْيَقِيْنِ ⑦

8. ಆ ಬಳಿಕ ಖಂಡಿತವಾಗಿಯೂ ಈ ಅನುಗ್ರಹಗಳ ಬಗ್ಗೆ ನೀವು ಪ್ರಶ್ನಿಸಲ್ಪಡುವಿರಿ. — ثُمَّ لَتُسْـَٔلُنَّ يَوْمَئِذٍ عَنِ النَّعِيْمِ ⑧ ع ٨ ٢٧

---

1. ಸದ್ಯವೇ ಎಂದರೆ ಪರಲೋಕವೂ ಆಗಿರಬಹುದು ಅಥವಾ ಮರಣವೂ ಆಗಿರಬಹುದು. ಏಕೆಂದರೆ ಯಾವ ಚಟುವಟಿಕೆಗಳಲ್ಲಿ ನಾನು ಜೀವನ ಕಳೆದೆನೋ ಅದು ನನ್ನ ಪಾಲಿಗೆ ಅನುಗ್ರಹ ಮತ್ತು ಸಂತಸ-ಸೌಭಾಗ್ಯ ತರುವ ಸಾಧನಗಳಾಗಿದ್ದುವೋ ಅಥವಾ ಕೆಟ್ಟ ಪರಿಣಾಮ ಮತ್ತು ನಿಂದ್ಯತೆಗೆ ಹೇತುವಾಗಿದ್ದುವೋ ಎಂಬುದು ಮರಣ ಹೊಂದಿದ ತಕ್ಷಣ ಮಾನವನ ಮುಂದೆ ಅನಾವರಣಗೊಳ್ಳುವುದು.